


# ಕರ್ನಾಟಕ  ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3022 (2508)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಕಂದಾಯ ಸಚಿವರು

ವಿಷಯ : ಬೆಳಗಾವಿ ಜಿಲ್ಲೆಯಲ್ಲಿ ನೂತನವಾಗಿ ರಚಿಸಲಾದ ತಾಲ್ಲೂಕುಗಳಲ್ಲಿ ಸಿಬ್ಬಂದಿ ಮತ್ತು ಮೂಲ ಸೌಲಭ್ಯ ಕೊರತೆ ಕುರಿತು

(ಅ) ಬೆಳಗಾವಿ ಜಿಲ್ಲೆಯಲ್ಲಿ ನೂತನವಾಗಿ ರಚಿಸಲಾಗಿರುವ ನಿಪ್ಪಾಣಿ, ಕಿತ್ತೂರು, ಮೂಡಲಗಿ ಮತ್ತು ಯರಗಟ್ಟಿ ತಾಲ್ಲೂಕುಗಳಲ್ಲಿ ಮೂಲ ಸೌಕರ್ಯ ಹಾಗೂ ಅಗತ್ಯ ಸಿಬ್ಬಂದಿಗಳಿಲ್ಲದೆ ಸಾರ್ವಜನಿಕ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ನೂತನವಾಗಿ ರಚಿಸಿರುವ ತಾಲ್ಲೂಕುಗಳಿಗೆ ಅಗತ್ಯ ಸಿಬ್ಬಂದಿಗಳನ್ನು ಮತ್ತು ಕಛೇರಿಗಳಿಗೆ ಮೂಲ ಸೌಲಭ್ಯಗಳು ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಇ) ಬೆಳಗಾವಿ ಜಿಲ್ಲೆಯಲ್ಲಿ ನೂತನವಾಗಿ ರಚಿಸಲಾದ ತಾಲ್ಲೂಕುಗಳಿಗೆ ಮಂಜೂರಾದ ಒಟ್ಟು ಹುದ್ದೆಗಳೆಷ್ಟು ; ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳೆಷ್ಟು ; (ವೃಂದವಾರು ವಿವರ ಒದಗಿಸುವುದು)

(ಈ) ನೂತನವಾಗಿ ತಾಲ್ಲೂಕುಗಳಿಗೆ ಮಿನಿ ವಿಧಾನಸೌಧ ನಿರ್ಮಿಸುವ ಕುರಿತು ಸರ್ಕಾರದ ನಿಲುವೇನು ; ಅವುಗಳಿಗೆ ಅನುದಾನ ಒದಗಿಸುವ ಮತ್ತು ಸ್ಥಳಗಳನ್ನು ನಿಗದಿ ಮಾಡುವ ಕುರಿತು ಸಂಪೂರ್ಣ ವಿವರ ಒದಗಿಸುವುದು ;

(ಉ) ಯಾವ ಕಾಲಮಿತಿಯಲ್ಲಿ ನೂತನ ತಾಲ್ಲೂಕುಗಳು ಸಂಪೂರ್ಣ ಸಿಬ್ಬಂದಿಗಳು/ಸೌಲಭ್ಯಗಳಿಂದ ಸದೃಢವಾಗಿ ಕಾರ್ಯಾರಂಭ ಮಾಡುವುವು ?